# ಬಾಹ್ಯ ಅಂತರಿಕ್ಷದಲ್ಲಿ ಜೀವಸೃಷ್ಟಿ ಇದೆಯೇ?

ಫ್ರ್ಯಾಂಕಲಿನ ಬ್ರ್ಯಾನಲಿ

ಚಿತ್ರಗಳುಃ ಎಡ್ವರ್ಡ ಮಿಲ್ಲರ

# ಬಾಹ್ಯ ಅಂತರಿಕ್ಷದಲ್ಲಿ ಜೀವಸೃಷ್ಟಿ ಇದೆಯೇ?

ಫ್ರ್ಯಾಂಕಲಿನ ಬ್ರ್ಯಾನಲಿ
ಚಿತ್ರಗಳುಃ ಎಡ್ವರ್ಡ ಮಿಲ್ಲರ
ಕನ್ನಡಕ್ಕೆಃ ಪ್ರಭಾಕರ ನಾನಾವಟಿ



## ಬಾಹ್ಯ ಅಂತರಿಕ್ಷದಲ್ಲಿ ಜೀವಸೃಷ್ಟಿ ಇದೆಯೇ?





ಪ್ರಾಣಿ ಪಕ್ಷಿಗಳು, ಕ್ರಿಮಿ ಕೀಟಕಗಳು, ಗಿಡ ಗಂಟಿಗಳು, ಹೂವು ಹಣ್ಣಿನ ಗಿಡಗಳು, ಮನುಷ್ಯರು ಮತ್ತು ಇನ್ನೆಷ್ಟೋ ಜೀವಪ್ರಕಾರಗಳು ಈ ಪೃಥ್ವಿ ಎಂಬ ಗ್ರಹದ ಮೇಲೆ ವಾಸಿಸುತ್ತವೆ. ಇಂತಹವುಗಳೆಲ್ಲ ಮತ್ತೆಲ್ಲಿಯಾದರೂ ವಾಸಿಸುತ್ತಿರಬಹುದೇ? ವನಸ್ಪತಿ ಮತ್ತು ಪ್ರಾಣಿಗಳು ಚಂದ್ರನ ಮೇಲೆ ವಾಸಿಸುತ್ತಿರಬಹುದೇ? ಮಂಗಳ ಇಲ್ಲವೆ ಗುರು ಗ್ರಹದ ಮೇಲೆ? ಇಲ್ಲದಿದ್ದರೆ ಅಂತರಿಕ್ಷದಲ್ಲಿಯ ದೂರವಿದ್ದ ಯಾವದಾದರೂ ತಾರೆಗಳ ಮೇಲೆ ವಾಸ ಮಾಡಿರಬಹುದೇ? ಎಷ್ಟೋ ವರುಷಗಳಿಂದ ಇಂತಹ ಪ್ರಶ್ನೆಗಳನ್ನು ಜನರು ಕೇಳುತ್ತಿದ್ದರು. ನಿಮಗೂ ಇದರ ಬಗ್ಗೆ ಕುತೂಹಲವಿರಬಹುದು.

ನೂರು ವರುಷಗಳ ಹಿಂದೆ ಚಂದ್ರನ ಮೇಲೆ ವನಸ್ಪತಿ ಮತ್ತು ಪ್ರಾಣಿಗಳಿವೆ ಎಂಬ ಸುದ್ದಿ ವೃತ್ತಪತ್ರಗಳಲ್ಲಿ ಬರುತ್ತಿತ್ತು. ಖಗೋಳಶಾಸ್ತ್ರಜ್ಞರು ತಮ್ಮ ದೊಡ್ಡ ಮತ್ತು ಹೊಸ ಟೆಲಿಸ್ಕೋಪದಲ್ಲಿಂದ ಇದನ್ನು ನೋಡಬಹುದು.
ಚಂದ್ರನ ಮೇಲೆ ಗಿಡಗಳಿವೆ; ಅವುಗಳ ಮೇಲೆ ಹಣ್ಣುಗಳು ಬೆಳೆದಿವೆ; ಚಿಕ್ಕ ಎಮ್ಮೆಗಳು ಗಿಡಗಳ ಕೆಳಗೆ ಮೇಯುತ್ತಲಿವೆ; ಕರಡಿಯಂತಹ ಪ್ರಾಣಿಗಳು ತಮ್ಮ ಹಿಂಬದಿಯ ಎರಡು ಕಾಲುಗಳಿಂದ ನಡೆಯುತ್ತಲಿವೆ; ಮುಂತಾದ ಸುದ್ದಿಗಳನ್ನು  ವೃತ್ತಪತ್ರಗಳು ಹರಡುತ್ತಿದ್ದವು.





ಅಲ್ಲಿ ಜನರು ಕೂಡ ಇದ್ದಾರೆ; ಅವರ ಮೈಮೇಲೆ ಕೂದಲುಗಳಿವೆ; ಅವರಿಗೆ ರೆಕ್ಕೆಗಳಿವೆ; ಅವರು ಗಿಡದ ಕೆಳಗೆ ಕುಳಿತು ಹಣ್ಣುಗಳ್ನು ತಿನ್ನುತ್ತಲಿದ್ದಾರೆ; ಎಂದು ಕೂಡ ಈ ವೃತ್ತಪತ್ರಗಳು ಕತೆ ಮಾಡಿ ಹೇಳುತ್ತಿದ್ದವು.

ಈ ಕತೆಗಳು ನಿಜವಾಗಿರಲಿಲ್ಲ. ಆದರೂ ಜನರು ಬಹಳ ವರುಷಗಳವರೆಗೆ ಚಂದ್ರಮಾನವರ ಅಸ್ತಿತ್ವವನ್ನು ನಂಬಿದ್ದರು.

ಮಂಗಳ ಗ್ರಹದ ಮಾರ್ಶಿಯನರು ಪೃಥ್ವಿಯ ಮೇಲೆ ಇಳಿದಿದ್ದಾರೆ ಎಂಬ ರೇಡಿಯೋ ಬಿತ್ತರಿಸಿದ ವಾರ್ತೆಗಳ ಮೇಲೆ ಆ ಜನರ ವಿಶ್ವಾಸವಿತ್ತು. ಮಾರ್ಶಿಯನ್ನರ ತಲೆಗಳು ದೊಡ್ಡವು ಮತ್ತು ಉಳಿದ ಶರೀರ ಚಿಕ್ಕದೆಂದು ಅದರಲ್ಲಿ ವರ್ಣಿಸಲಾಗಿತ್ತು.

ಅವರು ಅಂತರಿಕ್ಷಯಾನದಲ್ಲಿ ಕುಳಿತು ಬಂದಿದ್ದರೆಂದು ಮತ್ತು ಅವರು ಅಷ್ಟೊಂದು ಗೆಳೆತನ ಮಾಡದವರು ಎಂದು, ಹಾಗು ಅಂತರಿಕ್ಷಯಾನದಿಂದ ಇಳಿದ ಮೇಲೆ ಹಳ್ಳಿ-ಪಟ್ಟಣಗಳಲ್ಲಿ ಹೊಕ್ಕು ಜನರ ಮೇಲೆ ದಾಳಿ ಮಾಡುತ್ತಾರೆಂದು ಜನ ನಂಬಿತ್ತು.

1960ರ ದಶಕದವರೆಗೆ ಕೆಲ ಜನರಿಗೆ ಮಾರ್ಶಿಯನ್ನರು ಮತ್ತು ಚಂದ್ರಮಾನವರು ಇರಬಹುದೆಂದು ನಂಬಿಗೆ ಇತ್ತು. ಆದರೆ 1969ರ ನಂತರ ಎಲ್ಲರಿಗೂ ಚಂದ್ರನ ಮೇಲೆ ಯಾವದೇ ಜೀವಸೃಷ್ಟಿ ಇಲ್ಲ ಎಂಬುದು ತಿಳಿಯಿತು. ಆ ವರುಷ ನೀಲ ಆರ್ಮಸ್ಟ್ರಾಂಗ ಮತ್ತು ಎಡ್ವಿನ್ ಆಲ್ಡ್ರಿನ್ ಇವರು ಚಂದ್ರನ ಮೇಲೆ ಕೆಲ ಹೆಜ್ಜೆ ನಡೆದು ಹಿಂತಿರುಗಿ ಬಂದರು.





ಇವರು ತಿರುಗಿ ಬಂದಾದ ಮೇಲೆ ಎಷ್ಟೋ ಗಗನಯಾತ್ರಿಗಳು ಚಂದ್ರನ ಮೇಲೆ ಹೋಗಿ ತಿರುಗಿ ಬಂದರು. ಅವರು ಸಾಕಷ್ಟು ಕಡೆ ನೋಡಿದರೂ ಅವರಿಗೆ ಯಾವದೇ ಸಜೀವ ಪ್ರಾಣಿಗಳು ಕಾಣಲಿಲ್ಲ. ಎಲ್ಲಿಯೂ ವನಸ್ಪತಿಗಳಾಗಲಿ,, ಪ್ರಾಣಿಗಳಾಗಲಿ ಕಾಣಲಿಲ್ಲ. ಚಂದ್ರ ಇದು ಒಂದು ಮೃತಪ್ರಾಯ ಜಗತ್ತು. ಅದು ಯಾವಾಗಲು ಹಾಗೆಯೇ ಇತ್ತು.

ಆದರೆ ಇದರ ಮೇಲಿಂದ ಇಡೀ ಸೌರಮಾಲೆಯಲ್ಲಿಯೇ ಜೀವಸೃಷ್ಟಿ ಇಲ್ಲ ಎಂದು ಹೇಳಲು ಆಗದು. ಮಂಗಳ ಗ್ರಹವು ಎಷ್ಟೋ ವಿಷಯಗಳಲ್ಲಿ ಪೃಥ್ವಿಯಂತೆಯೇ ಇದೆ. ಅಲ್ಲಿ ಸಸ್ಯಗಳು ಇರಬಹುದು, ಪ್ರಾಣಿಗಳು ಕೂಡ ಇರಬಹುದು.  ಕತೆ ಮಾಡಿದಂತೆ ಒಂದು ವೇಳೆ ದೊಡ್ಡ ತಲೆಯ ಚಿಕ್ಕ ಶರೀರದ ಪ್ರಾಣಿಗಳು ಇರಲಿಕ್ಕಿಲ್ಲ. ಆದರೂ ಪ್ರಾಣಿಗಳು ಇರಬಹುದು.

ಮಂಗಳ ಗ್ರಹದ ಛಾಯಾಚಿತ್ರಗಳನ್ನು ನೋಡಿದರೆ ಕೆಲವು ಸ್ಥಳಗಳಲ್ಲಿ ನೀರು ಹರಿಯುತ್ತಿರುವದನ್ನು ಕಾಣಬಹುದು. ಎಲ್ಲಿ ನೀರಿದೆಯೋ ಅಲ್ಲಿ ಸಸ್ಯ ಮತ್ತು ಪ್ರಾಣಿಗಳು ಇರಲೇಬೇಕು. ಈ ಮೊದಲು ಎಂದಾದರೂ ವನಸ್ಪತಿಗಳು ಮತ್ತು ಪ್ರಾಣಿಗಳು ಇದ್ದಿರಬಹುದೇ? ಅವು ಈಗಲೂ ಇರಬಹುದೇ?

ಇದನ್ನು ಕಂಡು ಹಿಡಿಯಲು ಮಂಗಳ ಗ್ರಹದ ಮೇಲೆ ಪ್ರೋಬಗಳನ್ನು ಕಳುಹಿಸಿ ನೂರಾರು ಗಟ್ಟಲೆ ಚಿತ್ರಗಳನ್ನು ಸಂಗ್ರಹಿಸಲಾಯಿತು. ಅಲ್ಲಿಯ ಮಣ್ಣಿನ ನೀರಿಕ್ಷಣೆ ಮಾಡಲಾಯಿತು. ಆ ಚಿತ್ರಗಳಲ್ಲಿ ಯಾವದೇ ಪ್ರಾಣಿ ಇಲ್ಲವೆ ವನಸ್ಪತಿಗಳು ಕಾಣಲಿಲ್ಲ. ಮಣ್ಣಿನಲ್ಲಿ ಯಾವ ಜೀವವು ಸಿಗಲಿಲ್ಲ.



## ON MARS ಮಂಗಳದ ಮೇಲೆ












ಇನ್ನುಳಿದ ಗ್ರಹಗಳ ಸ್ಥಿತಿ ಏನಿರಬೇಕು? ಬುಧ ಇಲ್ಲವೆ ಶುಕ್ರ ಗ್ರಹಗಳ ಮೇಲೆ ಸಜೀವಿಗಳು ಇರಬಹುದು.
ಬುಧ ಗ್ರಹದ ಸಮೀಪ ಹೋಗಿ ನೋಡಲು ಪ್ರೋಬಗಳನ್ನು ಕಳುಹಿಸಲಾಯಿತು. ಅದು ಸಾಕಷ್ಟು ಚಿತ್ರಗಳನ್ನು ತೆಗೆದು ಕಳುಹಿಸಿತು. ಈ ಗ್ರಹದ ಮೇಲೆ ವನಸ್ಪತಿ ಮತ್ತು ಪ್ರಾಣಿಗಳು ಜೀವಿಸುವ ಶಕ್ಯತೆ ಕಾಣಲಿಲ್ಲ.
ಚಂದ್ರನಂತೆ ಇದು ಕೂಡ ಮೃತಪ್ರಾಯ ಗ್ರಹವು. ಅಲ್ಲದೆ ಅದು ಬಹಳ ಉಷ್ಣತೆಯುಳ್ಳ ಗ್ರಹವು. ಈ ಉಷ್ಣತೆಯಲ್ಲಿ ಯಾವ ಜೀವಿಗಳು ಬದುಕಲು ಸಾಧ್ಯವಿಲ್ಲ.





ಶುಕ್ರ ಗ್ರಹದ ಮೇಲೆ ಕೂಡ ಪ್ರೋಬಗಳನ್ನು ಕಳಹಿಸಲಾಯಿತು. ಅಲ್ಲಿರುವ ವಿಪರೀತ ಉಷ್ಣತೆಯಿಂದಾಗಿ ಪ್ರೋಬಗಳು ಅಲ್ಲಿ ಮುಟ್ಟಿದ ಕೂಡಲೆ ಸುಟ್ಟು ಕರಗಿ ಹೋದವು. ಅಲ್ಲದೆ ಅಲ್ಲಿಯ ವಿಷಯುಕ್ತ ಅನಿಲಗಳಿಂದಾಗಿ ಶುಕ್ರ ಗ್ರಹದ ಮೇಲೆ ಪ್ರಾಣಿಗಳಿರುವ ಯಾವ ಗುರುತು ದೊರೆಯಲಿಲ್ಲ.



ಈ ಸೌರಮಾಲೆಯ ಇನ್ನುಳಿದ ಗ್ರಹಗಳ ಮೇಲೆ ಜೀವಿಗಳು ಇರಬಹುದೆಂಬುದನ್ನು ಯಾರೂ ಅಪೇಕ್ಷಿಸುವದಿಲ್ಲ.

ಸೂರ್ಯ
SUN
Mercury
ಬುಧ
Venus
ಶುಕ್ರ
Earth
ಪೃಥ್ವಿ
Ma
ಮಂಗಳ
Jupiter
ಗುರು
Saturn
ಶನಿ
Uranus
ಯುರೆನಸ್
Neptune
ನೆಪ್ಚ್ಯೂನ
Pluto
ಪ್ಲ್ಯುಟೊ

ಗುರು, ಶನಿ, ಯುರೇನಸ್, ನೆಪ್ಚ್ಯೂನ, ಈ ಗ್ರಹಗಳೆಲ್ಲ ವಾಯುವಿನಿಂದ ತಯಾರಾಗಿವೆ. ಈ ಎಲ್ಲ ಗ್ರಹಗಳು ಅತೀ ಶೀತವಿರುವ ಗ್ರಹಗಳು. ಪೃಥ್ವಿಯ ಕೆಲ ಭಾಗಗಳಿಗಿಂತಲೂ ಅವು ತಂಪು ಅಲ್ಲದೆ ಚಿಕ್ಕ ಗ್ರಹವಾದ ಪ್ಲ್ಯುಟೋ ಕೂಡ!
ಹೀಗಾಗಿ ನಮ್ಮ ಸೌರಮಾಲೆಯಲ್ಲಿ ಪೃಥ್ವಿ ಬಿಟ್ಟರೆ ಇನ್ನುಳಿದ ಯಾವ ಗ್ರಹಗಳ ಮೇಲೂ ಜೀವಸೃಷ್ಟಿ ಇರಲಾರದು.

ಆದರೆ ಸೌರಮಾಲೆಯ ಆಚೆಗೆ ಅಬ್ಬಾನುಗಟ್ಟಲೆ ತಾರೆಗಳಿವೆ.
ಸೂರ್ಯನ ಸುತ್ತ ಪೃಥ್ವಿಯು ಪ್ರದಕ್ಷಿಣೆ ಹಾಕುತ್ತಿದ್ದಂತೆ ಈ ತಾರೆಗಳ ಸುತ್ತ ಪ್ರದಕ್ಷಿಣೆ ಹಾಕುತ್ತಿರುವ ಗ್ರಹಗಳಿರಬಹುದು.
ಅವುಗಳ ಮೇಲೆ ವನಸ್ಪತಿ ಮತ್ತು ಪ್ರಾಣಿಗಳು ವಾಸಿಸುತ್ತಿರಬಹುದು.
ಅವುಗಳನ್ನು ಸರಿಯಾಗಿ ಕಾಣಲಾರದ್ದರಿಂದ ನಾವು ಖಾತ್ರಿಪೂರಕವಾಗಿ ಏನೂ ಹೇಳಲಾರೆವು.

.

ಈ ಪ್ರಾಣಿಗಳು ನಮಗೆ ಗೊತ್ತಿರದ ಜಗತ್ತುಗಳಲ್ಲಿ ವಾಸಿಸುತ್ತಿದ್ದರೆ ಅವು ನಮ್ಮಲ್ಲಿಯ ವನಸ್ಪತಿ ಮತ್ತು ಪ್ರಾಣಿಗಳಿಗಿಂತ ಬೇರೆಯಾಗಿ ಕಾಣುತ್ತಿರಬಹುದು. ಮಾರ್ಶಿಯನ್ನರಂತೆ ದೊಡ್ಡ ತಲೆ ಮತ್ತು ಚಿಕ್ಕ ಶರೀರದ ಜನ ಇರಬಹುದು. ಇಲ್ಲವೆ ಚಂದ್ರಮಾನವರಂತೆ ರೆಕ್ಕೆ ಮತ್ತು ಕೂದಲಿರುವ ಜನರು ಇರಬಹುದು.

ದಪ್ಪವಾದ ಕಾಲುಗಳು ಮತ್ತು ಚಿಕ್ಕ ಕೈಗಳು ಇದ್ದ ಜನರಿರಬಹುದು. ಅವರು ನಾತ್ಕು ಕಾಲುಗಳ ಮೇಲೆ ನಡೆಯುತ್ತಿರಬಹುದು. ನಮ್ಮ ಕಲ್ಪನೆಗೂ ಎಟುಕದ ಶರೀರವುಳ್ಳ ಆ ಜನರಿರಬಹುದು.

ಯಾರಿಗೆ ಗೊತ್ತು?



ಇಂತಹ ವಿಷಯಗಳನ್ನು ಅಭ್ಯಸಿಸುವ ತಜ್ಞರು ಸೌರಮಾಲೆಯ ಆಚೆ ಪ್ರಾಣಿವಂಶವಿರುವದನ್ನು ನಂಬಲಾರರು. ಇನ್ನೂ ಕೆಲವರಿಗೆ ಇದೆಲ್ಲ ಕಲ್ಪನಾವಿಶ್ವದಲ್ಲಿಯ ಕಟ್ಟುಕತೆ ಎಂದೆನ್ನಿಸಬಹುದು. ಆದರೆ ನನಗೆ ಹಾಗೆ ಅನ್ನಿಸುವದಿಲ್ಲ.

ನಮ್ಮ ಸೌರಮಾಲೆಯ ಆಚೆ ಅಬ್ಜಾನುಗಟ್ಟಲೆ ತಾರೆಗಳಿವೆ. ಅಂತಹ ತಾರೆಗಳಲ್ಲಿ ಎಲ್ಲಿಯಾದರೂ ನಮ್ಮಂತಹ ಪ್ರಾಣಿ ಮತ್ತು ವನಸ್ಪತಿಗಳಿರುವ ಜಗತ್ತುಗಳು ಇರಲೇಬೇಕು. ಅಲ್ಲಿಯ ಮನಿಷ್ಯರಿಗೂ ನಮ್ಮಂತೆಯೇ ಸಾಕಷ್ಟು ವಿಷಯಗಳು ತಿಳಿದಿರಲೇಬೇಕು. ನಮಗಿಂತಲೂ ಅವರು ಹೆಚ್ಚು ಬುದ್ಧಿವಂತರು ಮತ್ತು ಜಾಣತನ ಉಳ್ಳವರು ಕೂಡ ಅವರಿರಬಹುದು.

ಎಂದಾದರು ಒಂದು ದಿನ ನಾವು ಅವರ ಜತೆ ಸಂಭಾಷಣೆ ಮಾಡಬಹುದು.







ಎಷ್ಟೋ ವರುಷಗಳ ನಂತರ ನಾವು ಅಂತರಿಕ್ಷಯಾನಗಳಲ್ಲಿ ಕುಳಿತು ಅತೀ ದೂರದ ಗ್ರಹಗಳನ್ನು  ಮುಟ್ಟಬಹುದು. ಆ ಗ್ರಹಗಳ ಮೇಲೆ ಇಳಿಯಬಹುದು ಎಂದು ನನಗೆ ಅನ್ನಿಸುತ್ತದೆ.

ನಿಮಗೆ ಹೇಗೆ ಅನ್ನಿಸುತ್ತದೆ?

## ಅಂತರಿಕ್ಷದಲ್ಲಿಯ ಜೀವಸೃಷ್ಟಿಯ ಬಗ್ಗೆ ಹೆಚ್ಚು ತಿಳಿದುಕೊಳ್ಳಲು

- ಅಂತರಿಕ್ಷದಲ್ಲಿಯ ಉಳಿದ ತಾರಾಂಗಣಗಳಲ್ಲಿ ಜೀವಸೃಷ್ಟಿ ಇದೆಯೋ ಇಲ್ಲವೋ ಎಂಬುದನ್ನು ತಿಳಿದುಕೊಳ್ಳಲು ಹೊರಟಾಗ ನೀವು ಯಾವ ರೀತಿಯ ಬಟ್ಟೆಗಳನ್ನು ತೊಡುವಿರಿ, ಎಂಬ ಬಗ್ಗೆ ವರ್ಣನೆ ಮಾಡಿ. ಎಲ್ಲ ಸೌಕರ್ಯಗಳು ದೊರೆಯುವ ಪೃಥ್ವಿಯ ಮೇಲೆ ನೀವು ಈಗಿಲ್ಲ ಎಂಬುದನ್ನು ನೆನಪಿಡಿ. ನಿಮ್ಮ ಬಟ್ಟೆಗಳು ಹವೆ, ನೀರು, ಆಹಾರ ಮತ್ತು ನಿಮ್ಮ ಶರೀರವನ್ನು ವಿಪರೀತ ಉಷ್ಣತೆ ಮತ್ತು ವಿಪರೀತ ಶೀತದಿಂದ ರಕ್ಷಿಸಬೇಕಾಗಿದೆ ಎಂಬುದು ನೆನಪಿರಲಿ.
- ಹೊರಜಗತ್ತಿನಲ್ಲಿ ಮನುಷ್ಯನಂತಹ ಪ್ರಾಣಿಗಳು ಸಿಕ್ಕರೆ ಅವರ ಜತೆ ಹೇಗೆ ಸಂವಾದ ಸಾಧಿಸುವಿರಿ? ನಿಮ್ಮ ಬಗ್ಗೆ, ನೀವು ಇರುವ ಜಗತ್ತಿನ ಬಗ್ಗೆ ಏನೇನು ಹೇಳಬಯಸುವಿರಿ? ಅಲ್ಲಿಯ ನಿಮ್ಮ ಜೀವನ ಇದೇ ರೀತಿಯದಿದೆಯೋ ಇಲ್ಲವೆ ಬೇರೆ ರೀತಿಯದೋ?
- ನೀವು ಹೊಸ ಗ್ರಹವನ್ನು ಶೋಧಿಸಿದರೆ ಅದು ಹೇಗೆ ಕಾಣಬಹುದು ಎಂಬುದರ ಕಲ್ಪನೆ ಮಾಡಿ ವರ್ಣಿಸಿ. ಸಜೀವ ಪ್ರಾಣಿಗಳು ಹೇಗೆ ಕಾಣುವವು? ಅಲ್ಲಿ ಪಕ್ಷಿಗಳು, ಜೇನ್ನೊಣಗಳು, ತಗಣಿಗಳು ಮುಂತಾದವುಗಳಿವೆಯೋ ಇಲ್ಲವೋ? ಸಜೀವಗಳ ಆಹಾರ ಮತ್ತು ಚಲನೆಗಳು ಹೇಗಿವೆ?
- ನಿಮ್ಮ ಹತ್ತಿರದ ಪ್ಲಾನಿಟೋರಿಯಮಕ್ಕೆ ಭೆಟ್ಟಿ ಕೊಡಿ. ಉಳಿದ ಗ್ರಹಗಳ ಬಗ್ಗೆ ಅಲ್ಲಿ ಹೆಚ್ಚು ಮಾಹಿತಿ ದೊರೆಯಬಹುದು.

